ವೇಮಗಲ್ ಸೋಮಶೇಖರ್ *

# ಬೆಂಗಳೂರಿನ ದೊಡ್ಡ ಬಸವಣ್ಣ ದೇವಾಲಯ ಮುಂದಿನ ಎರಡು ಅಪ್ರಕಟಿತ ಶಾಸನಗಳು

ಬೆಂಗಳೂರು ನಗರದ ಬಸವನಗುಡಿಯಲ್ಲಿರುವ ದೊಡ್ಡ ಬಸವಣ್ಣನ ದೇವಾಲಯದ ಮುಂಭಾಗದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ನೈಸರ್ಗಿಕವಾದ ಕಪ್ಪು ಬಣ್ಣದ ಕಲ್ಲುಬಂಡೆಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಬೃಹದಾಕಾರವಾದವು. ಈ ಬಂಡೆಗಳ ಮೇಲೆ ತಟ್ಟೆಯಾಕಾರದ ಕುಳಿಗಳು ಇರುವುದು ಇಲ್ಲಿಯ ವಿಶೇಷ. ಒಂದೇ ಬಂಡೆಗಳ ಮೇಲೆ ಸುಮಾರು ಇಪ್ಪತ್ತು ಕುಳಿಗಳಿರುವುದನ್ನು ಇಲ್ಲಿ ಕಾಣಬಹುದು. ಈ ಎಲ್ಲಾ ಕುಳಿಗಳ ವ್ಯಾಸ ಸುಮಾರು ಒಂದು ಅಡಿ, ಆಳ ಮೂರು ಅಂಗುಲ. ಗಮನಾರ್ಹ ಸಂಗತಿಯೆಂದರೆ ಈ ಕುಳಿಗಳ ಮಧ್ಯದಲ್ಲಿ ಎರಡು ಅಂಗುಲ ಆಳವುಳ್ಳ ಒಂದು ಸಣ್ಣ ಕುಳಿ ಇರುವುದು. ಒಂದು ಅಡಿಗಿಂತ ಹೆಚ್ಚು ಅಂತರವಿರುವ ಈ ಎಲ್ಲಾ ಕುಳಿಗಳು ಇಂದಿಗೂ ಸ್ವಲ್ಪವೂ ಸವೆಯದೆ ಕೆತ್ತಲು ಬಳಸಲಾಗಿರುವ ಕಬ್ಬಿಣದ ಉಳಿಗಳ ಗುರುತುಗಳನ್ನು ಕಾಣಬಹುದು.

## ಒಂದನೆಯ ಶಾಸನ

ಈ ಬಂಡೆಗಳ ಸಮೂಹದಲ್ಲಿರುವ ಎತ್ತರವಾದ ಒಂದು ಬಂಡೆಯ ಮೇಲೆ ಕೆಂಪೇಗೌಡರ ಕಾಲದಲ್ಲಿ ಕಹಳೆ ಊದುತ್ತಿದ್ದರಿಂದ ಇದಕ್ಕೆ 'ಕಹಳೆ ಬಂಡೆ' ಎಂದು ಹೆಸರು ಬಂದಿದ್ದು ಈಗಲೂ ಇದೇ ಹೆಸರು ಮುಂದುವರೆದಿದೆ. ಈ ಬಂಡೆಯ ಪಕ್ಕದಲ್ಲಿ ಪೂರ್ವಾಭಿಮುಖವಾಗಿ ಒಂದು ಸಾಲಿನ ಶಾಸನವಿದೆ. ''ದೀವಟಿಗೆ ಸೋಮನು......ಕುಲ ಗುರುಲಿಂಗ'' ಎಂಬುದು ಇದರ ಪಾಠ. ಅಕ್ಷರಗಳ ಲಕ್ಷಣಗಳಿಂದ ಇದು ಹದಿನಾರನೇ ಶತಮಾನವೆನ್ನಬಹುದು. ಈ ಶಾಸನದ ಕೆಲವೇ ಅಡಿಗಳ ಎದುರಿಗೆ ಹುಟ್ಟು ಬಂಡೆಯಲ್ಲಿಯೇ ಒಂದು ವೇದಿಕೆಯನ್ನು ನಿರ್ಮಿಸಲಾಗಿದೆ. ಸುಮಾರು ನಾಲ್ಕು ಜನ ಕುಳಿತುಕೊಳ್ಳಬಹುದಾದ ೧೨ ಅಡಿ ಉದ್ದ ೬ ಅಡಿ ಅಗಲವಿರುವ ಪೀಠ ಇದು. ಸುತ್ತಲೂ ಹೂವಿನ ಬಳ್ಳಿಯ ರೇಖಾಚಿತ್ರಗಳನ್ನು ಹೊಂದಿದ್ದು ಸುಂದರವಾಗಿ ತೋರುತ್ತದೆ. ಮೇಲ್ಭಾಗದಲ್ಲಿ ವೃತ್ತಾಕಾರದ ರೇಖಾಚಿತ್ರವನ್ನು ಹೊಂದಿದೆ.

ಕುಳಿಗಳ ಬಳಿ ಸುತ್ತಲೂ ಎಣ್ಣೆಯ ಜಿಡ್ಡಿನ ಕಪ್ಪಾದ ಗುರುತುಗಳು ಕಾಣಬರುವುದರಿಂದ ಇವುಗಳು ನಾನಾ ಬಗೆಯಲ್ಲಿ ಕುತೂಹಲವನ್ನು ಕೆರಳಿಸುತ್ತದೆ. ಇವುಗಳ ಸ್ವರೂಪ ಮತ್ತು ಇಲ್ಲಿಯೇ ದೊರೆತ ಹಾಗೂ ಮೇಲೆ ಪ್ರಸ್ತಾಪಿಸಿದ ಶಾಸನದ ಹಿನ್ನೆಲೆಯಲ್ಲಿ ಈ ಕುಳಿಗಳೆಲ್ಲವೂ ದೀವಟಿಗೆ (ದೀಪ)ಗಳಿಗೆ ಉಪಯೋಗಿಸುತ್ತಿದ್ದರೆಂಬುದಾಗಿ ಹೇಳಬಹುದು. ಈ ಕುಳಿಗಳ ಮಧ್ಯೆ ಇರುವ ಚಿಕ್ಕ ಕುಳಿಯಲ್ಲಿ ಬತ್ತಿಯನ್ನು ಉದ್ದದ ಕೊಳವೆಯ ಆಧಾರದಿಂದ ನಿಲ್ಲಿಸುವುದಕ್ಕೆ ಅನುಕೂಲವಾಗಲು ಕೆತ್ತಿರುವುದು ಇದನ್ನು ಸಮರ್ಥಿಸುತ್ತದೆ. ಇದೊಂದು ಬಯಲು ಸಂಸ್ಕೃತಿಗೆ ಸಂಬಂಧಿಸಿದ ವಿಶಿಷ್ಟ ಆಚರಣೆಯ ಕುಳಿಗಳು.

ಕೆಂಪೇಗೌಡರ ಕಾಲದಲ್ಲಿ ಶತ್ರುಗಳು ಬರುವುದನ್ನು ಗುರುತಿಸುವುದಕ್ಕಾಗಿ ಬಹು ಎತ್ತರವಾಗಿದ್ದ ಈ ಪ್ರದೇಶದಲ್ಲಿ ಒಂದು ಪಡೆಯನ್ನು ಇರಿಸಲಾಗಿದ್ದಿತು. ಈ ಪಡೆಯ ನಾಯಕನಾಗಿದ್ದವನು ಗುಜ್ಜಲನಾಯಕ ಎಂಬುವನು. ಈತ ತನ್ನ ಜನಾಂಗ (ಬೇಡ)ದ ಕುಲದೇವರಾದ ಬೇಡರಕಣ್ಣಪ್ಪನ ದೇವಾಲಯವನ್ನು ನಿರ್ಮಿಸಿರುವುದು ಕಾಣಬಹುದು. ಈ ಬೇಡ ಪಡೆಯವರೇ ಇಲ್ಲಿನ ದೀಪಗಳನ್ನು ಹಚ್ಚುತ್ತಿದ್ದರೆನ್ನಬಹುದು. ಇದೇ ರೀತಿಯಾದಂಥ ಒಂದು ಕುಳಿಯು

*ಕಛೇರಿ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆಸಾರ್ವಜನಿಕ ಸಂಸ್ಥೆ,ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯



ಬಸವನಗುಡಿಯ ದೊಡ್ಡ ಬಸವಣ್ಣದೇವಾಲಯದ
ಮುಂಭಾಗದಲ್ಲಿರುವ ಬಂಡೆಗಳ ಮೇಲಿರುವ ಕುಳಿಗಳು



ದೊಡ್ಡಬಸವಣ್ಣನ ದೇವಸ್ಥಾನದ ಮುಂಭಾಗದ ಬಂಡೆಯ
ಮೇಲಿರುವ ಶಾಸನ



ದೀವಟಿಗೆ ಸೋಮನ ಶಾಸನ

ಕೆಂಪಾಂಬುಧಿ ಕೆರೆಯ ಬಳಿ ಇರುವ ನಂಜಾಂಬ ಅಗ್ರಹಾರದ ಬಂಡೆ ಪ್ರದೇಶದಲ್ಲಿನ ಎತ್ತರವಾದ ಒಂದು ಬಂಡೆಯ ಮೇಲಿನ ಕಹಳೆ (ಕಾವಲು)ಗೋಪುರದ ಬಳಿ ಕಾಣ ಬಹುದಾಗಿದೆ.

**ಎರಡನೆಯ ಶಾಸನ**

ಬಸವಣ್ಣನ ದೇವಾಲಯ ಹೊರಭಾಗದಲ್ಲಿನ ಮೆಟ್ಟಲುಗಳ ಬಲಭಾಗದಲ್ಲಿರುವ ೫ ಅಡಿ ಅಗಲ ೧½ ಅಡಿ ಎತ್ತರದ ಬಂಡೆಯ ಮೇಲೆ ಮೂರು ಸಾಲಿನ ಶಾಸನವೊಂದು ಇದೆ. ಇದು ಈಗಾಗಲೇ ಬಸವನ ಪೀಠದಲ್ಲಿರುವ, ಪ್ರಕಟಿತ ಶಾಸನ ಪಾಠವನ್ನು ಹೋಲುತ್ತದೆ. ಆ ಶಾಸನ ''ಯೀ ಬಸವೇಶ್ವರನ'' ಎಂದು ಪ್ರಾರಂಭವಾದರೆ ಬಂಡೆಯ ಮೇಲಿರುವ ಅಪ್ರಕಟಿತ ಶಾಸನ '' ದೊಡ್ಡ ಬಸವೇಶ್ವರ'' ಎಂಬ ನಾಮದಿಂದ ಪ್ರಾರಂಭಗೊಳ್ಳುತ್ತದೆ. ಈ ಶಾಸನದ ಪಾಠ ಇಂತಿದೆ :

೧ ದೊಡ್ಡ ಬಸವೇಶ್ವರನ ಪಾ

೨ ದದಲಿ । ವ್ರಿಶಭಾವತಿಯೆಂಬ ನದಿ ಹು

೩ ಟ್ಟಿ । ಪಶ್ಚಿಮ ವಾಹಿನಿಯಾಗಿ ನಡೆಯಿತು.

ಈ ಶಾಸನವನ್ನು ದೇವಾಲಯ ನಿರ್ಮಾಣವಾದ ನಂತರದಲ್ಲಿ ದೇವಾಲಯಕ್ಕೆ ಭೇಟಿ ಕೊಡುವ ಜನರಿಗೆ ಸೂಚನೆ ನೀಡುವ ನಾಮಫಲಕದಂತೆ ಹಾಕಿಸಿರಬಹುದು ಎಂದು ಕಂಡು ಬರುತ್ತದೆ. ಅನೇಕ ರೇಖಾಚಿತ್ರಗಳನ್ನು ಬಂಡೆಗಳ ಮೇಲೆ ಕಾಣಬಹುದು. ಈ ಪರಿಸರದಲ್ಲಿ ಅಲ್ಲಲ್ಲಿ ಇದ್ದ ಅನೇಕ ವೀರಗಲ್ಲುಗಳನ್ನು ಈಗ ಒಂದು ಕಡೆ ಸಾಲಾಗಿ ಇರಿಸಲಾಗಿದ್ದು ಅವುಗಳಿಗೆ ಪೂಜೆಯನ್ನು ಸಲ್ಲಿಸಲಾಗುತ್ತಿದೆ.

ಇಲ್ಲಿಯ ದೊಡ್ಡ ಬಸವಣ್ಣನ ಎತ್ತರ ೧೧ ಅಡಿ ಇದ್ದರೆ, ಸನಿಹದಲ್ಲೇ ಇರುವ ಕಾರಂಜಿ ಆಂಜನೇಯ ವಿಗ್ರಹ ೧೨ ಅಡಿ ಇದ್ದು, ಗಣೇಶನ ವಿಗ್ರಹ ೧೩ ಅಡಿ ಇದೆ. ಅನುಕ್ರಮವಾಗಿರುವುದು ಗಮನಾರ್ಹ. ''ಕಾರಂಜಿ ಆಂಜನೇಯ'' ಹೆಸರಿನಿಂದ ಈ ಪರಿಸರದಲ್ಲಿ ಹುಟ್ಟುವ ವೃಷಭಾವತಿ ನದಿಯು ಉಕ್ಕಿದ ನೀರಿನಿಂದ ಕಾರಂಜಿಯ ಹಾಗೆ ಹೊರ ಚಿಮ್ಮಿ ಹರಿಯುತ್ತಿದ್ದಿತೆಂದು ತಿಳಿದುಬರುತ್ತದೆ.

ಇಲ್ಲಿ ಕೆಂಪೇಗೌಡರ ಕಾಲದಲ್ಲಿ ''ಬಸವನಹಳ್ಳಿ'' ಎಂಬ ಹೆಸರಿನಿಂದ ಒಂದು ಹಳ್ಳಿ ಪ್ರಾರಂಭವಾಗಿ ಕ್ರಮೇಣ ''ಬಸವನಪುರ'' ಆಗಿ ಈಗ ಬಸವನಗುಡಿ ಎಂಬ ಹೆಸರು ಪಡೆದಿರುವುದು ಪ್ರಸ್ತುತ ಅಧ್ಯಯನದಿಂದ ವ್ಯಕ್ತಪಟ್ಟಿದೆ. ಡಾ॥ ಎಸ್.ಆರ್.ರಾವ್ ಅವರು ಈ ಬಂಡೆ ಪ್ರದೇಶವನ್ನು ''ಚರಿತ್ರಾರ್ಹ ಪೂರ್ವ ಕಾಲದ ನೆಲೆ'' ಎಂದು ಅಭಿಪ್ರಾಯ ಪಟ್ಟಿರುವರು. ಸಾಂಸ್ಕೃತಿಕವಾಗಿ ಕೆಂಪೇಗೌಡರ ಕಾಲದಲ್ಲಿ ಹಬ್ಬ, ಹರಿದಿನ ಮತ್ತು ಜಾತ್ರೆಯ ಸಂದರ್ಭಗಳಲ್ಲಿ ಇಲ್ಲಿನ ಬಂಡೆಗಳ ಮೇಲಿನ ಕುಳಿಗಳು ಯಾವ ಪಾತ್ರ ವಹಿಸಿದ್ದವೆಂಬುದನ್ನು ಅಧಿಕ ಅಧ್ಯಯನದಿಂದ ಅರಿಯಲು ಅವಕಾಶವಿದೆ. ಈ ಎಲ್ಲಾ ಕುಳಿಗಳಲ್ಲಿನ ದೀಪಗಳನ್ನು ಹಚ್ಚಿಸಿದಾಗ ಈ ಪ್ರದೇಶ ಅದೆಷ್ಟು ಸುಂದರವಾಗಿ ಕಾಣುತ್ತಿದ್ದಿರಬಹುದೆಂಬುದೂ ಕುತೂಹಲಕರ ಸಂಗತಿ. ಕೆಂಪೇಗೌಡರ ವಂಶಸ್ಥರಿಂದ ಬಸವನಗುಡಿ ಮತ್ತು ಗವಿಪುರದ ಪ್ರದೇಶದಲ್ಲಿ ಅನೇಕ ದೇವಾಲಯಗಳು, ಮಠಗಳು, ನಿರ್ಮಾಣ ಹೊಂದಿ ಉತ್ತಮ ಧಾರ್ಮಿಕ ನೆಲೆಯಾಗಿದ್ದಿತೆಂದು ಹೇಳಬಹುದು.

ಈ ಬಯಲು ಬಂಡೆ ಕುಳಿಗಳನ್ನು ದಾಖಲಿಸಿಕೊಳ್ಳುವಲ್ಲಿ ಅನೇಕ ಸೂಚನೆ, ಸಲಹೆಗಳನ್ನು ನೀಡಿದ ಶ್ರೀ ಲಕ್ಷ್ಮಣ್ ತೆಲಗಾವಿ, ಮತ್ತು ಕ್ಷೇತ್ರಕಾರ್ಯದಲ್ಲಿಸಹಾಯ ಮಾಡಿದ ಶ್ರೀ ಮುತ್ತುರಾಜು ಅವರ ಉಪಕಾರ ಸ್ಮರಣಾರ್ಹ.

## ಗ್ರಂಥ ಋಣ

೧) ಕರ್ನಾಟಕ ದೇವಾಲಯಗಳು, (ಸಂ) ಸು.ರಂಗಸ್ವಾಮಿ., ಹಂಸಧ್ವನಿ ಪ್ರಕಾಶನ, ೧೯೯೪.

೨) ಬೆಂಗಳೂರಿನ ಇತಿಹಾಸ, (ಸಂ) ಬ.ನ.ಸುಂದರರಾವ್, ೧೯೮೫.

೩) ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ.

೪) ಎ.ಕ. ಸಂಪುಟ ೯, ಬೆಂಗಳೂರು ೭೦.

೫) ಲಕ್ಷ್ಮಣ್ ತೆಲಗಾವಿ., 'ಚರಿತ್ರಾರ್ಹ ಪೂರ್ವ ಕಾಲದ ನೆಲೆಗಳು' ಕನ್ನಡಪ್ರಭ, ೧೮.೯.೯೪.